# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 57

ಸದಸ್ಯರ ಹೆಸರು : ಶ್ರೀ ಅರವಿ ಕುಮಾರ್ ಅರಳಿ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 29.01.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಬೀದರ್ ಜಿಲ್ಲೆಯ ಸಾರಿಗೆ ವಿಭಾಗದಲ್ಲಿ ನೇಮಕವಾದ ದರ್ಜೆ-3 ಮತ್ತು 4 ಅಭ್ಯರ್ಥಿಗಳಿಗೆ 2 ವರ್ಷದ ತರಬೇತಿ ಅವಧಿಯಲ್ಲಿ ಕಾರ್ಮಿಕ ಇಲಾಖೆಯ ನಿಯಮಗಳಿಗಿಂತ ಕಡಿಮೆ ಸ್ಟೈಪಂಡ್ ನೀಡುತ್ತಿರುವುದರಿಂದ ಸದರಿ ತರಬೇತಿ ಅವಧಿ ತೆಗೆದು ಹಾಕಿ ಪರಿಕ್ಷಾರ್ಥ ಸೇವೆಗೆ ನೇಮಕ ಮಾಡಿಕೊಳ್ಳಲು ಅವಕಾಶವಿದೆಯೇ; | ಈ.ಕ.ರ.ಸಾ.ಸಂಸ್ಥೆಯಲ್ಲಿನ ಬೀದರ ವಿಭಾಗವೂ ಸೇರಿದಂತೆ ನಾಲ್ಕು ಸಾರಿಗೆ ಸಂಸ್ಥೆಗಳಲ್ಲಿ ಪದವೃಂದ ಮತ್ತು ನೇಮಕಾತಿ ನಿಯಮಾವಳಿ 1982 ರಂತೆ ನೇಮಕಾತಿಯನ್ನು ಮಾಡಿಕೊಳ್ಳಲಾಗುತ್ತಿದೆ. ನೇಮಕಾತಿ ನಿಯಮಾವಳಿಗಳ ಉಪ ನಿಯಮ 12ರ ಪ್ರಕಾರ ಆಯ್ಕೆಗೊಂಡ ಅಭ್ಯರ್ಥಿಯು ಪರೀಕ್ಷಾರ್ಥ ಸೇವೆಗೆ ನಿಯೋಜನೆಗೊಳ್ಳುವ ಮುನ್ನ ನಿರ್ಧಿಷ್ಟ ಅವಧಿಗೆ ತರಬೇತಿ ಅವಧಿಯನ್ನು ಪೂರ್ಣಗೊಳಿಸಬೇಕಾಗುತ್ತದೆ.<br>ಸದರಿ ನೇಮಕಾತಿ ನಿಯಮಾವಳಿಯನುಸಾರ ನೇಮಕಗೊಂಡು ತರಬೇತಿಯಲ್ಲಿರುವುದರಿಂದ ಅವರಿಗೆ ನಿಗದಿತ ಸ್ಟೈಫಂಡ್ ನೀಡಲಾಗುತ್ತಿದ್ದು, ಕಾರ್ಮಿಕ ಇಲಾಖೆಯ ಕನಿಷ್ಠ ವೇತನ ಪಾವತಿಸುವ ವ್ಯಾಪ್ತಿಗೆ ಬರುವುದಿಲ್ಲ. ತರಬೇತಿ ಅವಧಿ ತೆಗೆದು ಹಾಕಿ ನೇರವಾಗಿ ಪರೀಕ್ಷಾರ್ಥ ಸೇವೆಯ ಮೇಲೆ ನಿಯೋಜನೆ ಮಾಡಲು ಸಂಸ್ಥೆಯಲ್ಲಿ ಪ್ರಸ್ತುತ ಜಾರಿಯಲ್ಲಿರುವ ನಿಯಮಾವಳಿ ಯನುಸಾರ ಅವಕಾಶವಿರುವುದಿಲ್ಲ. |
| ಆ. | ಬೀದರ ಜಿಲ್ಲೆಯ NEKRTC ಘಟಕ-1ರಲ್ಲಿ ರೂ.59 ಲಕ್ಷ ಮೇಲ್ಪಟ್ಟು ಅವ್ಯವಹಾರ ನಡೆದಿರುವುದು ಸರಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಯಾವ ಕ್ರಮಗಳನ್ನು ಕೈಗೊಳ್ಳಲಾಗಿದೆ; (ಸಂಪೂರ್ಣ ವಿವರ ಒದಗಿಸುವುದು) | ಹೌದು, ಗಮನಕ್ಕೆ ಬಂದಿರುತ್ತದೆ.<br>ಈ ಪ್ರಕರಣದ ತನಿಖಾಧಿಕಾರಿಗಳು ಸಲ್ಲಿಸಿದ ವರದಿಯನ್ನಾಧರಿಸಿ, ಪ್ರಕರಣದಲ್ಲಿನ ಗಂಭೀರತೆಯನ್ನು ಆಧರಿಸಿ ಈಗಾಗಲೇ ಮೂರು (3) ಜನ ಅಧಿಕಾರಿಗಳನ್ನು ಹಾಗೂ ಹತ್ತು (10) ಜನ ಸಿಬ್ಬಂದಿಗಳನ್ನು ಸೇವೆಯಿಂದ ಅಮಾನತ್ತುಗೊಳಿಸಲಾಗಿರುತ್ತದೆ. ಉಳಿದ 17 ಅಧಿಕಾರಿ/ ಸಿಬ್ಬಂದಿಗಳು ಕ.ರಾ.ರ.ಸಾ.ನಿಗಮದ ನೌಕರರ (ನಡತೆ ಮತ್ತು ಶಿಸ್ತು) ನಿಯಮಗಳು 1971ರ ನಿಯಮ 23ರನ್ವಯ ಆಪಾದನಾ ಪತ್ರ ಜಾರಿಗೊಳಿಸಲಾಗಿದೆ.<br>ಸದರಿ ಅಧಿಕಾರಿ/ಸಿಬ್ಬಂದಿಗಳನ್ನು ಪ್ರಸ್ತುತ ಅಮಾನತ್ತಿನಿಂದ ತೆರವುಗೊಳಿಸಿದ್ದು, ಶಿಸ್ತು ಪ್ರಕರಣವನ್ನು ಇಲಾಖಾ ವಿಚಾರಣೆಗೆ ವಹಿಸಲಾಗಿದ್ದು ವಿಚಾರಣೆ ಹಂತದಲ್ಲಿರುತ್ತದೆ. |

ಸಂಖ್ಯೆ: ಟಿಡಿ 08 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು